





(ಅವತೀರ್ಣ - ಮಕ್ಕಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ ○

1. ಆವರಿಸಿ ಬಿಡಲಿರುವ ಆ ವಿಪತ್ತಿನ ಸುದ್ದಿ ನಿಮಗೆ ತಲುಪಿದೆಯೇ?

هَلْ اَتٰىكَ حَدِيْثُ الْغَاشِيَةِ ﴿١﴾

2. ಕೆಲವು ಮುಖಗಳು[1] ಅಂದು ಭಯಗ್ರಸ್ತವಾಗಿರುವುವು,

وُجُوْهٌ يَّوْمَئِذٍ خَاشِعَةٌ ﴿٢﴾

3. ತೀವ್ರ ಪರಿಶ್ರಮ ಪಡುತ್ತಿರುವುವು,

عَامِلَةٌ نَّاصِبَةٌ ﴿٣﴾

4. ಘೋರ ಅಗ್ನಿಯಲ್ಲಿ ಉರಿಯುತ್ತಿರುವುವು-

تَصْلٰى نَارًا حَامِيَةً ﴿٤﴾

5. ಅವರಿಗೆ ಕುದಿಯುತ್ತಿರುವ ಚಿಲುಮೆಯ ನೀರನ್ನು ಕುಡಿಯಲು ಕೊಡಲಾಗುವುದು.

تُسْقٰى مِنْ عَيْنٍ اٰنِيَةٍ ﴿٥﴾

6. ಮುಳ್ಳು ತುಂಬಿದ ಒಣಹುಲ್ಲಿನ ಹೊರತು ಬೇರೆ ಯಾವ ಆಹಾರವೂ ಅವರಿಗೆ ಇರಲಾರದು-

لَيْسَ لَهُمْ طَعَامٌ اِلَّا مِنْ ضَرِيْعٍ ﴿٦﴾

7. ಅದು ಪುಷ್ಟಿಗೊಳಿಸಲಾರದು, ಹಸಿವೆಯನ್ನೂ ನೀಗಿಸಲಾರದು-

لَّا يُسْمِنُ وَلَا يُغْنِيْ مِنْ جُوْعٍ ﴿٧﴾

8. ಅಂದು ಕೆಲವು ಮುಖಗಳು ಕಾಂತಿಯುಕ್ತವಾಗಿರುವುವು,

وُجُوْهٌ يَّوْمَئِذٍ نَّاعِمَةٌ ﴿٨﴾

9. ತಮ್ಮ ಸಾಧನೆಗಳ ಬಗ್ಗೆ ಸಂತುಷ್ಟವಾಗಿರುವುವು.

لِّسَعْيِهَا رَاضِيَةٌ ﴿٩﴾

10. ಉನ್ನತವಾದ ಸ್ವರ್ಗೋದ್ಯಾನಗಳಲ್ಲಿ ಇರುವುವು-

فِيْ جَنَّةٍ عَالِيَةٍ ﴿١٠﴾

11. ಅಲ್ಲಿ ಅವರು ಯಾವುದೇ ಅಸಂಬದ್ಧ ಮಾತನ್ನು ಕೇಳಲಾರರು.

لَّا تَسْمَعُ فِيْهَا لَاغِيَةً ﴿١١﴾

1. 'ಮುಖಗಳು' ಎಂಬ ಪದವನ್ನು ಇಲ್ಲಿ ವ್ಯಕ್ತಿಗಳು ಎಂಬರ್ಥದಲ್ಲಿ ಪ್ರಯೋಗಿಸಲಾಗಿದೆ. ಮುಖವು, ಮಾನವ ದೇಹದ ಅತ್ಯಂತ ಸುವ್ಯಕ್ತವಾದ ಭಾಗವಾಗಿರುವುದರಿಂದ 'ಕೆಲವು ವ್ಯಕ್ತಿಗಳು' ಎಂದು ಹೇಳುವ ಬದಲು 'ಕೆಲವು ಮುಖಗಳು' ಎಂಬ ಪದವನ್ನು ಪ್ರಯೋಗಿಸಲಾಗಿದೆ.

12. ಅದರಲ್ಲಿ ಚಿಲುಮೆಗಳು ಹರಿಯುತ್ತಿರುವುವು,
فِيهَا عَيْنٌ جَارِيَةٌ ١٢

13. ಅದರೊಳಗೆ ಉನ್ನತ ಪೀಠಗಳಿರುವುವು,
فِيهَا سُرُرٌ مَّرْفُوعَةٌ ١٣

14. ಪಾನಪಾತ್ರೆಗಳು ಇರಿಸಲ್ಪಟ್ಟಿರುವುವು,
وَّأَكْوَابٌ مَّوْضُوعَةٌ ١٤

15. ಒರಗುವ ದಿಂಬುಗಳ ಸಾಲುಗಳಿರುವುವು,
وَّنَمَارِقُ مَصْفُوفَةٌ ١٥

16. ಮತ್ತು ನುಣುಪಾದ ಹಾಸುಗಳು ಹಾಸಿರುವುವು.
وَّزَرَابِيُّ مَبْثُوثَةٌ ١٦

17. (ಇವರು ನಂಬುವುದಿಲ್ಲವೆಂದಾದರೆ) ಒಂಟೆಗಳು ಹೇಗೆ ಸೃಷ್ಟಿಸಲ್ಪಟ್ಟಿವೆ ಎಂಬುದನ್ನು ಇವರು ನೋಡುವುದಿಲ್ಲವೇ?
أَفَلَا يَنظُرُونَ إِلَى الْإِبِلِ كَيْفَ خُلِقَتْ ١٧

18. ಆಕಾಶವು ಹೇಗೆ ಎತ್ತರಿಸಲ್ಪಟ್ಟಿದೆಯೆಂಬುದನ್ನು ನೋಡುವುದಿಲ್ಲವೇ?
وَإِلَى السَّمَاءِ كَيْفَ رُفِعَتْ ١٨

19. ಪರ್ವತಗಳು ಹೇಗೆ ನಾಟಲ್ಪಟ್ಟಿವೆಯೆಂಬುದನ್ನು ನೋಡುವುದಿಲ್ಲವೇ?
وَإِلَى الْجِبَالِ كَيْفَ نُصِبَتْ ١٩

20. ನೆಲವನ್ನು ಹೇಗೆ ಹಾಸಲಾಗಿದೆಯೆಂಬುದನ್ನು ನೋಡುವುದಿಲ್ಲವೇ?[2]
وَإِلَى الْأَرْضِ كَيْفَ سُطِحَتْ ٢٠

21. ಸರಿ! (ಸಂದೇಶವಾಹಕರೇ) ನೀವು ಉಪದೇಶ ಮಾಡುತ್ತಾಸಾಗಿರಿ. ನೀವು ಕೇವಲ ಉಪದೇಶಕರು.
فَذَكِّرْ إِنَّمَا أَنتَ مُذَكِّرٌ ٢١

22. ಅವರ ಮೇಲೇನೂ ಬಲಾತ್ಕಾರ ಮಾಡುವವರಲ್ಲ-
لَّسْتَ عَلَيْهِم بِمُصَيْطِرٍ ٢٢

23. ಆದರೆ ಯಾರು ವಿಮುಖನಾಗುವನೋ ಹಾಗೂ ನಿರಾಕರಿಸುವನೋ-
إِلَّا مَن تَوَلَّىٰ وَكَفَرَ ٢٣

24. ಅವನಿಗೆ ಅಲ್ಲಾಹನು ಘೋರ ಯಾತನೆ ಕೊಡುವನು.
فَيُعَذِّبُهُ اللَّهُ الْعَذَابَ الْأَكْبَرَ ٢٤

2. ಅರ್ಥಾತ್- ಪರಲೋಕದ ಕುರಿತಾದ ಈ ಮಾತುಗಳನ್ನು ಕೇಳಿ ಇದು ಸಂಭವಿಸುವುದಾದರೂ ಹೇಗೆ ಎಂದು ಅವರು ಕೇಳುತ್ತಾರೆ. ಹಾಗಾದರೆ ಅವರು ತಮ್ಮ ಸುತ್ತಮುತ್ತಲಿನ ವಸ್ತುಗಳ ಕಡೆಗೆ ದೃಷ್ಟಿ ಬೀರುವುದಿಲ್ಲವೇ? ಈ ಒಂಟೆ ಹೇಗೆ ಸೃಷ್ಟಿಸಲ್ಪಟ್ಟಿತು? ಈ ಆಕಾಶ ಹೇಗೆ ಉನ್ನತಗೊಂಡಿತು? ಈ ಪರ್ವತ ಹೇಗೆ ನೆಲೆಯೂರಿತು? ಈ ಭೂಮಿ ಹೇಗೆ ಹರಡಿತು? ಎಂದು ಅವರೆಂದೂ ಆಲೋಚಿಸುವುದಿಲ್ಲವೇ. ಈ ವಸ್ತುಗಳೆಲ್ಲವೂ ಉಂಟಾಗಲು ಸಾಧ್ಯವಿದೆ. ಮಾತ್ರವಲ್ಲ ಅವರ ಮುಂದೆಯೇ ಅಸ್ತಿತ್ವದಲ್ಲಿದೆ. ಹಾಗಿರುವಾಗ ಪರಲೋಕ ಮಾತ್ರ ಯಾಕೆ ಬರಲಾರದು. ಪರಲೋಕದಲ್ಲಿ ಮತ್ತೊಂದು ವಿಶ್ವ ಅಸ್ತಿತ್ವಕ್ಕೆ ಬರಲು ಯಾಕೆ ಸಾಧ್ಯವಿಲ್ಲ. ಸ್ವರ್ಗ ಮತ್ತು ನರಕಗಳೇಕೆ ಉಂಟಾಗಲಾರವು.

25. ಇವರಿಗೆಲ್ಲ ನಮ್ಮ ಕಡೆಗೇ ಮರಳಲಿಕ್ಕಿದೆ- إِنَّ إِلَيْنَآ إِيَابَهُمْ ﴿٢٥﴾

26. ತರುವಾಯ ಇವರ ವಿಚಾರಣೆ ನಡೆಸುವ ಹೊಣೆ ನಮ್ಮ ಮೇಲೆಯೇ ಇದೆ. ثُمَّ إِنَّ عَلَيْنَا حِسَابَهُمْ ﴿٢٦﴾ ع ١ ٣ ١٣

---